





(ಅವತೀರ್ಣ - ಮಕ್ಕಾದಲ್ಲಿ)

بِسْمِ اللّٰهِ الرَّحْمٰنِ الرَّحِيْمِ ۝

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

إِذَا الشَّمْسُ كُوِّرَتْ ۝١

1. ಸೂರ್ಯನು ಸುತ್ತಲ್ಪಡುವಾಗ,-[1]

وَإِذَا النُّجُوْمُ انْكَدَرَتْ ۝٢

2. ನಕ್ಷತ್ರಗಳು ಚದುರಿ ಬಿಡುವಾಗ-

وَإِذَا الْجِبَالُ سُيِّرَتْ ۝٣

3. ಪರ್ವತಗಳು ಚಲಿಸಲ್ಪಡುವಾಗ,

وَإِذَا الْعِشَارُ عُطِّلَتْ ۝٤

4. ಮತ್ತು ಹತ್ತು ತಿಂಗಳ ಗರ್ಭಿಣಿ ಒಂಟೆಗಳನ್ನು ಅವುಗಳ ಪಾಡಿಗೆ ಬಿಟ್ಟು ಬಿಡಲಾಗುವಾಗ,[2]

وَإِذَا الْوُحُوْشُ حُشِرَتْ ۝٥

5. ವನ್ಯ ಮೃಗಗಳೆಲ್ಲಾ ಒಂದೆಡೆ ಸೇರಿಸಲ್ಪಡುವಾಗ,

وَإِذَا الْبِحَارُ سُجِّرَتْ ۝٦

6. ಸಮುದ್ರಗಳನ್ನು ಕೆರಳಿಸಿ ಬಿಡಲಾಗುವಾಗ,

وَإِذَا النُّفُوْسُ زُوِّجَتْ ۝٧

7. ಪ್ರಾಣಗಳನ್ನು (ಶರೀರಗಳೊಂದಿಗೆ) ಜೋಡಿಸಿ ಬಿಡಲಾಗುವಾಗ,[3]

وَإِذَا الْمَوْءٗدَةُ سُئِلَتْ ۝٨

8. ಜೀವಂತ ಹೂಳಲ್ಪಟ್ಟ ಹೆಣ್ಣು ಮಗುವಿನೊಡನೆ ಕೇಳಲಾಗುವಾಗ,

بِأَيِّ ذَنْۢبٍ قُتِلَتْ ۝٩

9. ಯಾವ ತಪ್ಪಿಗಾಗಿ ಅವಳನ್ನು ಕೊಲ್ಲಲಾಯಿತೆಂದು.

---

1. ಅರ್ಥಾತ್- ಸೂರ್ಯದಿಂದ ಹೊರಟು ಲೋಕದಾದ್ಯಂತ ಹರಡುವ ಪ್ರಕಾಶವನ್ನು ಅದಕ್ಕೆ ಸುತ್ತಿ ಬಿಡಲಾಗುವುದು ಮತ್ತು ಅದರ ಪ್ರಸರಣ ನಿಂತು ಬಿಡುವುದು.
2. ಅರಬರ ಪಾಲಿಗೆ ಮರಿಹಾಕುವ ಕಾಲ ಸಮೀಪಿಸಿರುವ ಒಂಟೆಗಿಂತ ಬೆಲೆಬಾಳುವ ಆಸ್ತಿ ಬೇರಾವುದೂ ಇರಲಿಲ್ಲ. ಅಂತಹ ಸಂದರ್ಭದಲ್ಲಿ ಅದರ ವಿಶೇಷ ರಕ್ಷಣೆ ಮತ್ತು ಆರೈಕೆ ಮಾಡಲಾಗುತ್ತಿತ್ತು. ಇಂತಹ ಹೆಣ್ಣು ಒಂಟೆಗಳನ್ನೂ ಜನರು ನಿರ್ಲಕ್ಷಿಸಿ ಬಿಡುವುದೆಂದರೆ, ಅತ್ಯಂತ ಆತ್ಮೀಯವಾದ ಸಂಪತ್ತನ್ನು ರಕ್ಷಿಸುವ ಬಗ್ಗೆಯೂ ಪರಿವೆಯಿಲ್ಲದಂತಹ ಭೀಕರ ವಿಪತ್ತು ಬಂದೆರಗಿದೆ ಎಂದರ್ಥ.
3. ಅರ್ಥಾತ್- ಮರಣಕ್ಕೆ ಮೊದಲು ಲೋಕದಲ್ಲಿ ದೇಹ ಮತ್ತು ಆತ್ಮದ ಜತೆ ಬದುಕಿದ್ದಂತೆಯೇ ಮಾನವರನ್ನು ಪುನರಪಿ ಜೀವಂತಗೊಳಿಸಲಾಗುವುದು.

| | |
|---|---|
| 10. ಕರ್ಮಪತ್ರಗಳು ತೆರೆಯಲ್ಪಡುವಾಗ, | وَإِذَا الصُّحُفُ نُشِرَتْ ﴿١٠﴾ |
| 11. ಆಕಾಶದ ತೆರೆಯು ಸರಿಸಲ್ಪಡುವಾಗ, | وَإِذَا السَّمَآءُ كُشِطَتْ ﴿١١﴾ |
| 12. ನರಕವು ಭುಗಿಲೇಳಿಸಲ್ಪಡುವಾಗ, | وَإِذَا الْجَحِيمُ سُعِّرَتْ ﴿١٢﴾ |
| 13. ಮತ್ತು ಸ್ವರ್ಗವು ಹತ್ತಿರ ತರಲ್ಪಡುವಾಗ, | وَإِذَا الْجَنَّةُ أُزْلِفَتْ ﴿١٣﴾ |
| 14. ಪ್ರತಿಯೊಬ್ಬನಿಗೂ ತಾನೇನು ತಂದಿರುವೆನೆಂದು ತಿಳಿದು ಬಿಡುವುದು. | عَلِمَتْ نَفْسٌ مَّآ أَحْضَرَتْ ﴿١٤﴾ |
| 15-16. ಹಾಗಲ್ಲ,[4] ನಾನು ಆಣೆ ಹಾಕುತ್ತೇನೆ ಮರಳುವ ಹಾಗೂ ಮರೆಯಾಗುವ ತಾರೆಗಳ- | فَلَآ أُقْسِمُ بِالْخُنَّسِ ﴿١٥﴾ الْجَوَارِ الْكُنَّسِ ﴿١٦﴾ |
| 17. ಮತ್ತು ರಾತ್ರೆಯ- ಅದು ತೆರಳಿದಾಗ- | وَالَّيْلِ إِذَا عَسْعَسَ ﴿١٧﴾ |
| 18. ಮತ್ತು ಮುಂಜಾನೆಯ- ಅದು ಉಸಿರಾಡಿದಾಗ- | وَالصُّبْحِ إِذَا تَنَفَّسَ ﴿١٨﴾ |
| 19. ಇದು ನಿಜಕ್ಕೂ ಒಬ್ಬ ಸನ್ಮಾನ್ಯ ದೂತನ ಮಾತಾಗಿದೆ-[5] | إِنَّهُۥ لَقَوْلُ رَسُولٍ كَرِيمٍ ﴿١٩﴾ |
| 20. ಅವನು ಮಹಾಶಕ್ತಿಶಾಲಿ, ವಿಶ್ವಸಿಂಹಾಸನದ ಒಡೆಯನ ಬಳಿ ಉನ್ನತ ಸ್ಥಾನವುಳ್ಳವನು- | ذِى قُوَّةٍ عِندَ ذِى الْعَرْشِ مَكِينٍ ﴿٢٠﴾ |
| 21. ಅಲ್ಲಿ ಅವನ ಆದೇಶವನ್ನು ಪಾಲಿಸಲಾಗುತ್ತದೆ.[6] ಅವನು ವಿಶ್ವಾಸಾರ್ಹನಾಗಿರುತ್ತಾನೆ. | مُّطَاعٍ ثَمَّ أَمِينٍ ﴿٢١﴾ |
| 22. ಮತ್ತು (ಮಕ್ಕಾವಾಸಿಗಳೇ) ನಿಮ್ಮ ಸಂಗಾತಿ[7] ಹುಚ್ಚನಲ್ಲ. | وَمَا صَاحِبُكُم بِمَجْنُونٍ ﴿٢٢﴾ |
| 23. ಅವರು ಆ ದೂತನನ್ನು ಪ್ರಕಾಶಮಯ ದಿಗಂತದಲ್ಲಿ ಕಂಡಿದ್ದಾರೆ. | وَلَقَدْ رَءَاهُ بِالْأُفُقِ الْمُبِينِ ﴿٢٣﴾ |

4. ಅರ್ಥಾತ್- ಕುರ್‌ಆನಿನಲ್ಲಿ ವಿವರಿಸಲಾಗುತ್ತಿರುವುದೆಲ್ಲವೂ ಹುಚ್ಚನ ಬಡಬಡಿಕೆ ಅಥವಾ ಪಿಶಾಚಿಯ ದುಷ್ಪ್ರೇರಣೆ ಎಂಬ ನಿಮ್ಮ ಶಂಕೆ ಸರಿಯಲ್ಲ.

5. ಇಲ್ಲಿ 'ಸನ್ಮಾನ್ಯದೂತ'(ರಸೂಲುನ್ ಕರೀಮ್) ಎಂದು ಹೇಳಲಾಗಿರುವುದು ದೇವವಾಣಿಯನ್ನು ತರುವ ದೇವಚರನ ಕುರಿತಾಗಿದೆ. ಮುಂದಿನ ಸೂಕ್ತದಿಂದ ಈ ವಿಷಯ ಸ್ಪಷ್ಟವಾಗಿ ತಿಳಿದು ಬರುತ್ತದೆ. ಕುರ್‌ಆನನ್ನು 'ದೂತನ ಮಾತು' ಎಂದು ಹೇಳಲಾಗಿರುವುದರ ಅರ್ಥ ಇದು ಸ್ವತಃ ಆ ದೇವಚರನ ಮಾತೇ ಆಗಿದೆ ಎಂದಲ್ಲ. ಬದಲಾಗಿ 'ದೂತನ ಮಾತು' ಎಂಬ ಪದವೇ ಸೂಚಿಸುವಂತೆ ಇದು ಅದನ್ನು ದೂತನನ್ನಾಗಿ ಮಾಡಿ ಕಳುಹಿಸಿದ ಆ ಶಕ್ತಿಯ ಮಾತಾಗಿದೆ.

6. ಅರ್ಥಾತ್- ಅವನು ದೇವಚರರೆಲ್ಲರ ಮೇಲಾಧಿಕಾರಿಯಾಗಿದ್ದಾನೆ. ದೇವಚರರೆಲ್ಲರೂ ಅವನ ಅಪ್ಪಣೆಯಂತೆಯೇ ಕೆಲಸ ಮಾಡುತ್ತಾರೆ.

7. ನಿಮ್ಮ ಸಂಗಾತಿಯೆಂದರೆ ಪ್ರವಾದಿವರ್ಯರು(ಸ).

| | |
|---|---|
| 24. ಮತ್ತು ಅವರು ಪರೋಕ್ಷದ (ಈ ಜ್ಞಾನವನ್ನು ಜನರಿಗೆ ತಲಪಿ ಸುವ) ವಿಷಯದಲ್ಲಿ ಜಿಪುಣರಲ್ಲ. | وَمَا هُوَ عَلَى الْغَيْبِ بِضَنِيْنٍ ۚ ﴿٢٤﴾ |
| 25. ಮತ್ತು ಇದು ಯಾವುದೇ ಬಹಿಷ್ಕೃತ ಶೈತಾನನ ಮಾತಲ್ಲ- | وَمَا هُوَ بِقَوْلِ شَيْطٰنٍ رَّجِيْمٍ ۙ ﴿٢٥﴾ |
| 26. ಇನ್ನು ನೀವೆತ್ತ ಸಾಗುತ್ತಿರುವಿರಿ? | فَاَيْنَ تَذْهَبُوْنَ ۗ ﴿٢٦﴾ |
| 27. ಇದಂತು ಸಮಸ್ತ ಲೋಕದವರಿಗೊಂದು ಉಪದೇಶವಾಗಿರುತ್ತದೆ- | اِنْ هُوَ اِلَّا ذِكْرٌ لِّلْعٰلَمِيْنَ ۙ ﴿٢٧﴾ |
| 28. ನಿಮ್ಮ ಪೈಕಿ ಸನ್ಮಾರ್ಗದಲ್ಲಿ ನಡೆಯಲಿಚ್ಛಿಸುವ ಪ್ರತಿಯೊಬ್ಬನಿಗೆ. | لِمَنْ شَآءَ مِنْكُمْ اَنْ يَّسْتَقِيْمَ ۗ ﴿٢٨﴾ |
| 29. ಸರ್ವಲೋಕಗಳ ಪಾಲಕ ಪ್ರಭುವಾದ ಅಲ್ಲಾಹನು ಇಚ್ಛಿಸದೆ, ನಿಮ್ಮ ಇಚ್ಛೆಯಿಂದ ಏನೂ ಆಗುವುದಿಲ್ಲ. | وَمَا تَشَآءُوْنَ اِلَّآ اَنْ يَّشَآءَ اللّٰهُ رَبُّ الْعٰلَمِيْنَ ﴿٢٩﴾ |